# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ

ಒಂಬತ್ತನೇ ಅಧಿವೇಶನ

(ಮುಂದುವರೆದ ಉಪವೇಶನಗಳು)

## ಕಾರ್ಯಕಲಾಪಗಳ ಪಟ್ಟಿ

ಬುಧವಾರ, ದಿನಾಂಕ 23ನೇ ಮಾರ್ಚ್, 2016

(ಸಮಯ: ಬೆಳಗ್ಗೆ 11.00 ಗಂಟೆ)

-----

### 1. ವಿತ್ತೀಯ ಕಾರ್ಯಕಲಾಪಗಳು

"2016-17ನೇ ಸಾಲಿನ ಆಯವ್ಯಯ ಅಂದಾಜುಗಳ ಮೇಲೆ ಮುಂದುವರೆದ ಸಾಮಾನ್ಯ ಚರ್ಚೆ".

### 2. ಸಭೆಯ ಮುಂದಿಡಲಾಗುವ ಕಾಗದ ಪತ್ರಗಳು

**ಶ್ರೀ ಸಿದ್ಧರಾಮಯ್ಯ (ಮುಖ್ಯಮಂತ್ರಿಗಳು) ಅವರು:**

ಭಾರತ ಸಂವಿಧಾನದ 151 (2)ನೇ ಅನುಚ್ಛೇದದ ಮೇರೆಗೆ ಭಾರತದ ಲೆಕ್ಕನಿಯಂತ್ರಕರು ಮತ್ತು ಮಹಾಲೆಕ್ಕಪರಿಶೋಧಕರು 31ನೇ ಮಾರ್ಚ್ 2015ಕ್ಕೆ ಕೊನೆಗೊಂಡ ವರ್ಷಕ್ಕೆ ನೀಡಿರುವ ಈ ಕೆಳಕಂಡ ವರದಿಗಳನ್ನು ಸಭೆಯ ಮುಂದಿಡುವುದು.

1. **ರಾಜ್ಯ ಸರ್ಕಾರದ ಹಣಕಾಸಿನ ವ್ಯವಹಾರಗಳ ಮೇಲಿನ ವರದಿ 2014-15.**
2. **ಸಾಮಾನ್ಯ ಮತ್ತು ಸಾಮಾಜಿಕ ವಲಯ ಮೇಲಿನ 2016ನೇ ವರ್ಷದ ವರದಿ(ಸಂಖ್ಯೆ-1).**
3. **ಸ್ಥಳೀಯ ಸಂಸ್ಥೆಗಳ ಮೇಲಿನ 2016ನೇ ವರ್ಷದ ವರದಿ (ಸಂಖ್ಯೆ-4).**

### 3.ಪ್ರಶ್ನೋತ್ತರ

**ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಏಳನೇ ಪಟ್ಟಿ**

**ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಏಳನೇ ಪಟ್ಟಿ**

........2

## 4.ಗಮನ ಸೆಳೆಯುವ ಸೂಚನೆಗಳು

1. **ಶ್ರೀ ಎಸ್.ಎನ್. ಸುಬ್ಬಾರೆಡ್ಡಿ** ಅವರು – ಚಿಕ್ಕಬಳ್ಳಾಪುರ ಜಿಲ್ಲೆ ಬಾಗೇಪಲ್ಲಿ ತಾಲ್ಲೂಕು ಕಸಬಾ ಹೋಬಳಿ ಮಾಕಿರೆಡ್ಡಿಪಲ್ಲಿ ಮತ್ತು ಮುದ್ದಲಪಲ್ಲಿ ಗ್ರಾಮಗಳ ನಡುವಿನ ಕೋಮಟೊಳ್ಳಕುಂಟೆ ಹಳ್ಳಕ್ಕೆ ಅಡ್ಡಲಾಗಿ ಮಲ್ಟೀ ವಿಲೇಜ್ ವಾಟರ್ ಸಪ್ಲೈ ಸ್ಕೀಂ ಯೋಜನೆಯಡಿಯಲ್ಲಿ ಬ್ಯಾರೇಜ್ ನಿರ್ಮಾಣದ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

2. **ಶ್ರೀ ಸಿ.ಎನ್. ಬಾಲಕೃಷ್ಣ** ಅವರು – ಹಾಸನ ಜಿಲ್ಲೆ, ಚನ್ನರಾಯಪಟ್ಟಣ ತಾಲ್ಲೂಕು, ಬಾಗೂರು ಹೋಬಳಿಯ ನವಿಲೆ ಏತ ನೀರಾವರಿ ಯೋಜನೆಯ ನಿರ್ಗಮನ ದ್ವಾರದಿಂದ ಕುಡಿಯುವ ನೀರಿನ ಯೋಜನೆಗಾಗಿ ಕೆಂಬಾಳು, ಬಿದರೆ, ಶಿವರ ಹಾಗೂ ಕಲ್ಲೇಸೋಮನಹಳ್ಳಿ ವ್ಯಾಪ್ತಿಯ 19 ಕೆರೆಗಳಿಗೆ ನೀರು ಒದಗಿಸುವ ಯೋಜನೆಯು ವಿಳಂಬವಾಗುತ್ತಿರುವ ಬಗ್ಗೆ ಮಾನ್ಯ ಬೃಹತ್ ಮತ್ತು ಮಧ್ಯಮ ನೀರಾವರಿ ಸಚಿವರ ಗಮನ ಸೆಳೆಯುವುದು.

3. **ಶ್ರೀ ಹೆಚ್.ಕೆ. ಕುಮಾರಸ್ವಾಮಿ** ಅವರು – ಅಂಬೇಡ್ಕರ್ ಅಭಿವೃದ್ಧಿ ನಿಗಮದಲ್ಲಿ ಪರಿಶಿಷ್ಟ ಜಾತಿ ಫಲಾನುಭವಿಗಳಿಗೆ ನೇರಸಾಲ ಮತ್ತು ಇತರೆ ಸಾಲ ನೀಡಿಕೆ ಪ್ರಮಾಣ ಕಡಿಮೆ ಆಗಿದ್ದು, ವಿಶೇಷ ಘಟಕ ಯೋಜನೆ ಅನುದಾನವನ್ನು ಬಳಸಿ ಫಲಾನುಭವಿಗಳಿಗೆ ಅನುಕೂಲ ಮಾಡಿಕೊಡುವ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

4. **ಶ್ರೀ ಎನ್. ಚಲುವರಾಯಸ್ವಾಮಿ** ಅವರು – ಮಂಡ್ಯ ಜಿಲ್ಲೆಯ ಯಲಿಯೂರು ಕೆರೆಕೋಡಿಯ ಸರ್ಕಾರಿ ಗೋದಾಮು ಮತ್ತು ಕೃಷ್ಣರಾಜಪೇಟೆಯ ಗೋದಾಮಿನಿಂದ ಸರ್ಕಾರ ಬೆಂಬಲ ಬೆಲೆಯಲ್ಲಿ ಸಂಗ್ರಹಿಸಿದ್ದ ಸಾವಿರಾರು ಕ್ವಿಂಟಲ್ ಭತ್ತ, ರಾಗಿ ಧಾನ್ಯ ಕಣ್ಮರೆಯಾಗಿರುವ ಬಗ್ಗೆ ಮಾನ್ಯ ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕ ವ್ಯವಹಾರಗಳ ರಾಜ್ಯ ಸಚಿವರ ಗಮನ ಸೆಳೆಯುವುದು.

5. **ಶ್ರೀ ಯು.ಬಿ. ಬಣಕಾರ** ಅವರು – ಸರ್ವಜ್ಞ ಪ್ರಾಧಿಕಾರವನ್ನು ರಚನೆ ಮಾಡಿ ಅನುದಾನ ಒದಗಿಸುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

6. **ಶ್ರೀ ಸಾ.ರಾ. ಮಹೇಶ್** ಅವರು – ಶ್ರೀರಾಮ ಸಕ್ಕರೆ ಕಾರ್ಖಾನೆ ನಿ., ಪುನರಾರಂಭಿಸುವ ಬಗ್ಗೆ ಮಾನ್ಯ ಸಹಕಾರ ಮತ್ತು ಸಕ್ಕರೆ ಸಚಿವರ ಗಮನ ಸೆಳೆಯುವುದು.

7. **ಶ್ರೀಯುತರುಗಳಾದ ಹೆಚ್.ಡಿ. ರೇವಣ್ಣ, ಕೆ.ಎಂ. ಶಿವಲಿಂಗೇಗೌಡ, ಎಂ.ಟಿ. ಕೃಷ್ಣಪ್ಪ ಅವರುಗಳು** – ಹಾಸನ ಜಿಲ್ಲಾ ಲೋಕಸಭಾ ಸದಸ್ಯರ ಕ್ಷೇತ್ರಾಭಿವೃದ್ಧಿ ನಿಧಿಯಿಂದ 2015-16ನೇ ಸಾಲಿನಲ್ಲಿ 5 ಕೋಟಿ ಅನುದಾನಕ್ಕೆ ಕಾಮಗಾರಿಗಳನ್ನು ನೀಡಿದ್ದರೂ ಸಹ ಜಿಲ್ಲಾಡಳಿತ ಮತ್ತು ಜಿಲ್ಲಾ ಪಂಚಾಯತ್ ಇಲಾಖೆಯ ಇಂಜಿನಿಯರುಗಳು ಕಾಮಗಾರಿಗಳನ್ನು ಕೈಗೊಳ್ಳದೆ ಕೇಂದ್ರದಿಂದ ಅನುದಾನವನ್ನು ತರಿಸಿಕೊಳ್ಳದೆ ಜಿಲ್ಲೆಯಲ್ಲಿ ಅಭಿವೃದ್ಧಿ ಕುಂಠಿತಗೊಂಡಿದ್ದು, ಈ ಲೋಪಗಳಿಗೆ ಕಾರಣಕರ್ತರಾದ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಯೋಜನೆ ಮತ್ತು ಸಾಂಖ್ಯಿಕ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರ ಗಮನ ಸೆಳೆಯುವುದು.

8. **ಶ್ರೀ ಬಿ.ಆರ್. ಪಾಟೀಲ್** ಅವರು – ಕೋತನ ಹಿಪ್ಪರಗಾ ಮತ್ತು ನಿಂಬರ್ಗಾ ಕೆರೆ ಕಾಮಗಾರಿಗಳಿಗೆ ಕೇಂದ್ರ ಸರ್ಕಾರ ಪುರಸ್ಕೃತ AIBP ಅಡಿಯಲ್ಲಿ ಮಂಜೂರಾಗಿದ್ದರೂ ಸಹ ರಾಜ್ಯ ಸರ್ಕಾರ ಸದರಿ ಕಾಮಗಾರಿಗಳನ್ನು ಪ್ರಾರಂಭ ಮಾಡಬಾರದೆಂದು ಸೂಚಿಸಿರುವುದರಿಂದ ಜನರಲ್ಲಿ ಅತಂಕ ಮೂಡಿರುವ ಬಗ್ಗೆ ಮಾನ್ಯ ಭಾರೀ ಮತ್ತು ಮಧ್ಯಮ ನೀರಾವರಿ ಸಚಿವರ ಗಮನ ಸೆಳೆಯುವುದು.

9. **ಶ್ರೀ ಬಿ.ಬಿ. ನಿಂಗಯ್ಯ** ಅವರು – ಮೂಡಿಗೆರೆ ತಾಲ್ಲೂಕು, ಬಣಕಲ್ಲು ಹೋಬಳಿ ಫಲ್ಗುಣಿ ಗ್ರಾಮ ಪಂಚಾಯ್ತಿ ವ್ಯಾಪ್ತಿಯ ಬಂಕೇನಹಳ್ಳಿ ಗ್ರಾಮಕ್ಕೆ ಸಂಪರ್ಕಿಸುವ ಜಿಲ್ಲಾ ಪಂಚಾಯತ್ ರಸ್ತೆಗೆ, ಹೇಮಾವತಿ ನದಿಗೆ ಅಡ್ಡಲಾಗಿ ನಿರ್ಮಿಸಿದ್ದ ಸೇತುವೆಯು ಕಳೆದ ವರ್ಷ ಸುರಿದ ಭಾರಿ ಮಳೆಯಿಂದ ಕುಸಿದು ಹೋಗಿದ್ದು, ಕೂಡಲೇ ದುರಸ್ಥಿ ಕಾರ್ಯವನ್ನು ಪ್ರಾರಂಭಿಸಿ ಅಭಿವೃದ್ಧಿ ಪಡಿಸುವ ಬಗ್ಗೆ ಮಾನ್ಯ ಲೋಕೋಪಯೋಗಿ ಸಚಿವರ ಗಮನ ಸೆಳೆಯುವುದು.

10. **ಶ್ರೀ ಎನ್.ಹೆಚ್. ಕೋನರಡ್ಡಿ** ಅವರು – ಬೆಂಗಳೂರಿನ ಫ್ರೀಡಂ ಪಾರ್ಕ್‌ನಲ್ಲಿ ಮುಷ್ಕರ ನಡೆಸುತ್ತಿರುವ "**108-ಆರೋಗ್ಯ ಕವಚ**" ಆಂಬ್ಯುಲೆನ್ಸ್ ಸೇವಾ ಯೋಜನೆಯಡಿ ಕಾರ್ಯನಿರ್ವಹಿಸುತ್ತಿರುವ ವಾಹನ ಚಾಲಕರು ಮತ್ತು ಇನ್ನಿತರ ಸಿಬ್ಬಂದಿಯವರ ಬೇಡಿಕೆಗಳನ್ನು ಈಡೇರಿಸುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಗಮನ ಸೆಳೆಯುವುದು.

11. **ಶ್ರೀ ಪಿ.ರಾಜೀವ್** ಅವರು – ಕುಡಚಿ ಮತಕ್ಷೇತ್ರದ ಗ್ರಾಮ ಪಂಚಾಯಿತಿ ಕೇಂದ್ರಗಳಲ್ಲಿ ರೈತರಿಗೆ ಪಹಣಿ ಪತ್ರಗಳನ್ನು ಶೀಘ್ರವಾಗಿ ವಿತರಣೆ ಮಾಡುವ ಯೋಜನೆಯನ್ನು ಪ್ರಾಯೋಗಿಕವಾಗಿ ಪ್ರಾರಂಭಿಸುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

.......4

12. **ಶ್ರೀ ಎಂ.ಟಿ.ಕೃಷ್ಣಪ್ಪ** ಅವರು – ಚಿಕ್ಕನಾಯಕನಹಳ್ಳಿ ತಾಲ್ಲೂಕು, ಹುಳಿಯಾರು ಹೋಬಳಿ, ಅಂಬಾಪುರ ಗ್ರಾಮದ ಸರ್ವೆ ನಂಬರ್ 46 ರಲ್ಲಿನ ಮೀಸಲು ಅರಣ್ಯ ಪ್ರದೇಶವು ಒತ್ತುವರಿಯಾಗಿದ್ದು, ಕಂದಾಯ ಅಧಿಕಾರಿಗಳು ಯಾವುದೇ ಕ್ರಮಕೈಗೊಳ್ಳದಿರುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

13. **ಶ್ರೀ ಬಿ.ಝಡ್. ಜಮೀರ್ ಅಹಮದ್ ಖಾನ್** ಅವರು – ರಾಜ್ಯದಲ್ಲಿ ಪೋಲೀಸ್ ಇನ್ಸ್‌ಪೆಕ್ಟರ್ ಹಾಗೂ ಸಬ್ – ಇನ್ಸ್‌ಪೆಕ್ಟರ್‌ಗಳನ್ನು ಅವಧಿಪೂರ್ವ ವರ್ಗಾವಣೆ ಮಾಡುವುದನ್ನು ತಪ್ಪಿಸಲು ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

**5. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ**

**ಶ್ರೀಯುತರುಗಳಾದ ಕೆ.ಎಸ್.ಪುಟ್ಟಣ್ಣಯ್ಯ, ಎ.ಬಿ.ರಮೇಶ ಬಂಡಿ ಸಿದ್ದೇಗೌಡ ಮತ್ತು ಎನ್.ಚಲುವರಾಯಸ್ವಾಮಿ ಇವರುಗಳು** – ಕೃಷ್ಣರಾಜಸಾಗರ ಅಣೆಕಟ್ಟೆಯಲ್ಲಿ ನೀರಿಲ್ಲದೆ ಮಧ್ಯಂತರ ಬೆಳೆಗಳು ಒಣಗಿ ನಷ್ಟವುಂಟಾಗುವ ಪರಿಸ್ಥಿತಿಯಿದ್ದು, ಬೇಸಿಗೆಯಲ್ಲಿ ಬೆಳೆಗಳಿಗೆ ನೀರಿಲ್ಲದೆ ಸಂಕಷ್ಟಕ್ಕೊಳಗಾಗಿರುವ 100ಕ್ಕೂ ಹೆಚ್ಚು ರೈತರ ಆತ್ಮಹತ್ಯೆಯ ಕಾರಣಗಳಿಂದ ಮಂಡ್ಯ ಜಿಲ್ಲೆಯಿಂದ ಲಕ್ಷಾಂತರ ಯುವಕರು ಮತ್ತು ರೈತರು ನಗರಗಳಿಗೆ ಗುಳೆ ಹೋಗಿರುವ ಮತ್ತು ಹೋಗುತ್ತಿರುವ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

**ಎಸ್. ಮೂರ್ತಿ**
ಕಾರ್ಯದರ್ಶಿ(I/c)

**ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.**
(http://kla.kar.nic.in/assembly/lob/lob.htm)